ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1000 |
| ಸದಸ್ಯರ ಹೆಸರು | ಶ್ರೀ ಎನ್. ರವಿಕುಮಾರ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 22.12.2021 |
| ಉತ್ತರಿಸಬೇಕಾದ ಸಚಿವರು | ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು ತೆಂಗನಾಯ್ಕನಹಳ್ಳಿ ಗ್ರಾಮದ ಸ.ನಂ. 36 ರಲ್ಲಿರುವ ಜಾಗದ ವಿಸ್ತೀರ್ಣವೆಷ್ಟು; ಪ್ರಸ್ತುತ ಈ ಜಾಗವನ್ನು ಯಾವ ರೀತಿಯಾಗಿ ಉಪಯೋಗಿಸಲಾಗುತ್ತಿದೆ; ಸದರಿ ಜಾಗದ ಡ್ರೋಣ್ ಸರ್ವೇಯೊಂದಿಗೆ ಸಂಪೂರ್ಣ ವಿವರ ನೀಡುವುದು; | ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು ತೆಂಗನಾಯ್ಕನಹಳ್ಳಿ ಗ್ರಾಮದ ರೀ. ಸರ್ವೆ ನಂ. 36 ಆಕಾರಬಂದು ಪ್ರಕಾರ ಒಟ್ಟು 15 ಎಕರೆ 30 ಗುಂಟೆ ಸರ್ಕಾರಿ ಬಿ ಖರಾಬಿ ನಲ್ಲಿ ದಾಖಲಾಗಿರುತ್ತದೆ.<br><br>ಪ್ರಸ್ತುತ ಈ ಜಾಗದಲ್ಲಿ ವಿವಿಧ ರೀತಿಯ ಮಾವು, ತೆಂಗು ಇತರೆ ಬೆಳೆಗಳನ್ನು ಬೆಳೆಯುತ್ತಿರುವುದು ಕಂಡು ಬರುತ್ತಿದ್ದು ಸುಮಾರು 2.೦೦ ಎಕರೆ ಪ್ರದೇಶದಲ್ಲಿ ಕಲ್ಲು ಗಣಿಗಾರಿಕೆಯಿಂದ ಬರುವಂತಹ ಅನುಪಯಕ್ತ ಕಲ್ಲು ಮಣ್ಣು ಶೇಖರಣೆ ಮಾಡಿರುವುದು ಕಂಡುಬಂದಿರುತ್ತದೆ. ಸದರಿ ಜಮೀನನ್ನು ಡ್ರೋಣ್ ಸರ್ವೆ ನಡೆಸಿರುವುದಿಲ್ಲ. |
| ಆ) | ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು ತೆಂಗನಾಯ್ಕನಹಳ್ಳಿ ಗ್ರಾಮದ ಸ.ನಂ. 36 ರಲ್ಲಿ ಅನಧಿಕೃತ ಅಕ್ರಮ ಕಲ್ಲು ಗಣಿಗಾರಿಕೆ ನಡೆಸುತ್ತಿರುವ ಕುರಿತು ತಹಶೀಲ್ದಾರರಿಗೆ ಸಾರ್ವಜನಿಕರು ನೀಡಿರುವ ದೂರಿನ ಕುರಿತು ಕೈಗೊಂಡ ಕ್ರಮಗಳೇನು; | ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕು, ತೆಂಗನಾಯ್ಕನಹಳ್ಳಿ ಗ್ರಾಮದ ಸ.ನಂ. 36 ರಲ್ಲಿ 3-05 ಎಕರೆ 105 ರಲ್ಲಿ 2-03 ಎಕರೆ ಮತ್ತು 64 ರಲ್ಲಿ 3-34 ಎಕರೆ ಜಮೀನಿನ ಪ್ರದೇಶದಲ್ಲಿ ಕಲ್ಲು ಗಣಿಗಾರಿಕೆಗೆ ಲೀಜ್ ಪಡೆದಿದ್ದು ಕಲ್ಲು ಗಣಿಗಾರಿಕೆಯಿಂದ ಬರುವಂತಹ ಅನುಪಯುಕ್ತ ಕಲ್ಲು ಮಣ್ಣು ಶೇಖರಣೆಯನ್ನು ಸರ್ಕಾರಿ ಗೋಮಾಳ ಸ.ನಂ.36 ರಲ್ಲಿ ಮಾಡುತ್ತಿರುವುದು ಕಂಡುಬಂದಿರುತ್ತದೆ. ಈ ಬಗ್ಗೆ ಪರಿಶೀಲಿಸಲಾಗಿದ್ದು, ಒತ್ತುವರಿ ಹಾಗೂ ಅನುಪಯುಕ್ತ ಕಲ್ಲು-ಮಣ್ಣು ಶೇಖರಣೆ ಮಾಡುತ್ತಿರುವ ಬಗ್ಗೆ ತಾಲ್ಲೂಕು ಮೋಜಿಣಿದಾರರಿಂದ ಸ್ಕೆಚ್ ಪಡೆದು ಸದರಿ ಅನುಪಯುಕ್ತ ಕಲ್ಲು ಮಣ್ಣು ಶೇಖರಣೆಯನ್ನು ಹಾಗೂ ಒತ್ತುವರಿಯನ್ನು ತೆರವುಗೊಳಿಸುವ ಕಾರ್ಯ ಪ್ರಗತಿಯಲ್ಲಿರುತ್ತದೆ. ಈ ಪ್ರಕರಣದಲ್ಲಿ ಯಾವುದೇ ಅಧಿಕಾರಿಗಳು ತಪ್ಪಿತಸ್ಥರೆಂದು ಕಂಡುಬಂದಲ್ಲಿ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳಲಾಗುವುದು. |
| ಇ) | ಈ ಅನಧಿಕೃತ ಅಕ್ರಮ ಕಲ್ಲುಗಣಿಗಾರಿಕೆಗೆ ತಹಶೀಲ್ದಾರರೇ ನೇರವಾಗಿ ಸಂಪೂರ್ಣವಾಗಿ ಹೊಣೆಗಾರರಾಗಿರುವ ಕುರಿತು ಸರ್ಕಾರದ ನಿಲುವೇನು? | |

ಸಂಖ್ಯೆ: ಕಂಇ 234 ಎಸ್.ಎಸ್.ಸಿ 2021

(ಆರ್. ಅಶೋಕ)
ಕಂದಾಯ ಸಚಿವರು